11/12/2020

## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| **ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** | 586 |
| **ಸದಸ್ಯರ ಹೆಸರು** | ಶ್ರೀ ಆರ್.ಧರ್ಮಸೇನ<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| **ಉತ್ತರಿಸಬೇಕಾದ ದಿನಾಂಕ** | 11.12.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಗ್ರಾಮ ವಿಕಾಸ ಯೋಜನೆ ಜಾರಿಯಲ್ಲಿದೆಯೇ; ಹಾಗಿದ್ದಲ್ಲಿ, ಅದರ ರೂಪುರೇಷೆಗಳೇನು; | ಜಾರಿಯಲ್ಲಿರುವುದಿಲ್ಲ,<br><br>2014-15 ನೇ ಸಾಲಿನಲ್ಲಿ ಪ್ರಾರಂಭವಾಗಿ 2016-17ರ ತನಕ ಈ ಯೋಜನೆಯಡಿ ಒಟ್ಟು 939 ಗ್ರಾಮಗಳನ್ನು ಆಯ್ಕೆ ಮಾಡಲಾಗಿದೆ. ಪ್ರತಿ ಗ್ರಾಮದ ಅಭಿವೃದ್ಧಿಗೆ ರೂ.75.00 ಲಕ್ಷದಂತೆ ಅನುದಾನ ಕಲ್ಪಿಸಲಾಗಿದ್ದು, ಈ ಯೋಜನೆ ಈಗ ಮುಕ್ತಾಯಗೊಂಡಿದ್ದು, ಯಾವುದೇ ಕಾಮಗಾರಿಗಳು ಬಾಕಿ ಇರುವುದಿಲ್ಲ. ಸಂಪೂರ್ಣ ಅನುದಾನವೂ ಕೂಡ ಬಿಡುಗಡೆ ಮಾಡಲಾಗಿದೆ. |
| ಆ. | ಈ ಯೋಜನೆಯಲ್ಲಿ ಗ್ರಾಮಗಳ ಆಯ್ಕೆಯನ್ನು ಮಾಡುವ ನಿರ್ಧಾರವನ್ನು ಯಾರು ಕೈಗೊಳ್ಳುತ್ತಾರೆ; | ಗ್ರಾಮ ವಿಕಾಸ ಯೋಜನೆಯಡಿಯಲ್ಲಿ 189 ಗ್ರಾಮೀಣ ವಿಧಾನಸಭಾ ಕ್ಷೇತ್ರದ ಮಾನ್ಯ ಶಾಸಕರುಗಳು ಗ್ರಾಮಗಳ ಆಯ್ಕೆಗೆ ಶಿಫಾರಸ್ಸು ಮಾಡಲು ಅವಕಾಶ ಕಲ್ಪಿಸಲಾಗಿತ್ತು. |
| ಇ. | ಶಾಸಕರಿಗೆ ಗ್ರಾಮಗಳನ್ನು ಆಯ್ಕೆ ಮಾಡುವ ಅಧಿಕಾರ ಇದ್ದರೂ ವಿಧಾನ ಪರಿಷತ್ತಿನ ಸದಸ್ಯರಿಗೆ ಅವಕಾಶ ನೀಡದಿರುವುದು ನಿಜವೇ; ಶಾಸಕರಲ್ಲಿ ವಿಧಾನ ಸಭೆ ಮತ್ತು ವಿಧಾನ ಪರಿಷತ್ತಿನ ಸದಸ್ಯರಲ್ಲಿ ತಾರತಮ್ಯ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗ್ರಾಮ ವಿಕಾಸ ಯೋಜನೆಯಡಿ ಗ್ರಾಮಗಳನ್ನು ಆಯ್ಕೆ ಮಾಡಲು ಕೇವಲ ವಿಧಾನಸಭಾ ಕ್ಷೇತ್ರದ ಶಾಸಕರುಗಳಿಗೆ ಅವಕಾಸ ಕಲ್ಪಿಸಲಾಗಿತ್ತು. ಗ್ರಾಮ ವಿಕಾಸ ಯೋಜನೆ ಮುಕ್ತಾಯಗೊಂಡ ನಂತರ 2017-18ನೇ ಸಾಲಿನಲ್ಲಿ **"ಮುಖ್ಯಮಂತ್ರಿಗಳ ಗ್ರಾಮ ವಿಕಾಸ ಯೋಜನೆ"** ಎಂಬ ಹೆಸರಿನಲ್ಲಿ ಹೊಸ ಯೋಜನೆಯನ್ನು ರೂಪಿಸಿ, ಇದರಲ್ಲಿ ಪ್ರತಿ ಗ್ರಾಮಕ್ಕೆ ರೂ.1.00 ಕೋಟಿ ಅನುದಾನವನ್ನು ಕಲ್ಪಿಸಲಾಗಿದ್ದು, ಈ ಯೋಜನೆಯಡಿ ಗ್ರಾಮಗಳನ್ನು ಆಯ್ಕೆ ಮಾಡಲು ವಿಧಾನ ಪರಿಷತ್ ಶಾಸಕರುಗಳಿಗೆ ಅವಕಾಶ ಕಲ್ಪಿಸಲಾಗಿದೆ.<br><br>ಪ್ರತಿ ವಿಧಾನ ಪರಿಷತ್ತಿನ ಶಾಸಕರುಗಳು ಒಂದು ಗ್ರಾಮವನ್ನು ಆಯ್ಕೆ ಮಾಡಲು ಅವಕಾಶ ಕಲ್ಪಿಸಿಕೊಡಲಾಗಿದೆ. |
| ಈ | ಇನ್ನು ಮುಂದಾದರೂ ಈ ತಾರತಮ್ಯವನ್ನು ಹೋಗಲಾಡಿಸಿ ಶಾಸಕರನ್ನು ಸಮಾನವಾಗಿ ಕಾಣಲು ಕ್ರಮಕೈಗೊಳ್ಳಲಾಗುವುದೇ? | |

ಕಡತ ಸಂಖ್ಯೆ: ಗ್ರಾಅಪ:ಅಧಿ-08/31:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯಿತ್ ರಾಜ್ ಸಚಿವರು

**ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ಆರ್ ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:586ಕ್ಕೆ ಪೂರಕ ಟಿಪ್ಪಣಿ**

## ಗ್ರಾಮ ವಿಕಾಸ ಯೋಜನೆ

ಸುವರ್ಣ ಗ್ರಾಮೋದಯ ಯೋಜನೆಯ ಉದ್ದೇಶಗಳನ್ನು ಆಧರಿಸಿ ಯೊಜನೆಯ ಅನುಷ್ಠಾನದಲ್ಲಿ ಗ್ರಾಮ ಪಂಚಾಯಿತಿಗಳಿಗೆ ಹೆಚ್ಚಿನ ಹೊಣೆಗಾರಿಕೆಯನ್ನು ನೀಡಿ, ಆಯ್ಕೆಯಾದ ಪ್ರತಿ ಗ್ರಾಮಕ್ಕೆ ರೂ.75.00 ಲಕ್ಷಗಳನ್ನು ನೀಡಿ 1000 ಗ್ರಾಮಗಳನ್ನು ರೂ.755.02 ಕೋಟಿಗಳ ಅನುದಾನದಲ್ಲಿ ಅಭಿವೃದ್ಧಿ ಪಡಿಸುವ ಗ್ರಾಮ ವಿಕಾಸ ಯೋಜನೆಯನ್ನು 2014-15ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಲಾಗಿತ್ತು.

**ಯೋಜನೆಯ ಉದ್ದೇಶ:**

- ಗ್ರಾಮಗಳ ಸಮಗ್ರ ಅಭಿವರದ್ಧಿಯನ್ನು ಗಮನದಲ್ಲಿಟ್ಟುಕೊಂಡು ಪ್ರತಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಪ.ಜಾತಿ ಮತ್ತು ಪ.ಪಂಗಡದ ಜನರು ಹೆಚ್ಚು ವಾಸಿಸುವ 2 ಗ್ರಾಮಗಳೂ ಸೇರಿ ಒಟ್ಟು 5 ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಗೆ 3 ವರ್ಷದ ಯೋಜನೆಯನ್ನು ಜಾರಿಗೆ ತರಲಾಗಿದೆ.
- ತಲಾನುದಾನ ರೂ.7500/- ರಂತೆ ಪ್ರತಿ ವಿಧಾನಸಭಾ ಕ್ಷೇತ್ರಕ್ಕೆ ಒಟ್ಟು 5000 ಜನ ಸಂಖ್ಯೆಯುಳ್ಳ ಗರಿಷ್ಟ 5 ಗ್ರಾಮಗಳನ್ನು ಆಯ್ಕೆ ಮಾಡಲಾಗಿದೆ.
- ಗ್ರಾಮೀಣ ಪ್ರದೇಶದ ಕಟ್ಟಕಡೆಯ ವ್ಯಕ್ತಿಗೂ, ಶುದ್ಧ ಕುಡಿಯುವ ನೀರು, ಉತ್ತಮ ಆಹಾರ, ಆರೋಗ್ಯ, ರಸ್ತೆ, ಬೆಳಕು ಇತ್ಯಾದಿ ದೊರೆಯುವಂತಾಗಲು ಕ್ರಮ ಕೈಗೊಳ್ಳಲು.
- ಹಳ್ಳಿಗಳಲ್ಲಿ ಸ್ವಚ್ಛತೆ ನೈರ್ಮಲ್ಯ ಹಾಗೂ ಉತ್ತಮ ಬೌತಿಕ ಪರಿಸರವನ್ನು ನಿರ್ಮಿಸಲು
- ಅಗತ್ಯ ಮೂಲಭೂತ ಸೌಕರ್ಯಗಳೊಂದಿಗೆ ಗ್ರಾಮೀಣ ಬದುಕನ್ನು ಹಸನುಗೊಳಿಸುವ ಸಲುವಾಗಿ ಯೋಜನೆಯನ್ನು ಜಾರಿಗೆ ತರಲಾಗಿದೆ.

**ಗ್ರಾಮಗಳ ಆಯ್ಕೆ:**

- ಸರ್ಕಾರಿ ಆದೇಶದಲ್ಲಿ ನಿಗಧಿಪಡಿಸಿದ ಜನ ಸಂಖ್ಯೆ ಹಾಗೂ ಮಾನದಂಡಗಳನ್ನು ಆಧರಿಸಿ ಸ್ಥಳೀಯ ಶಾಸಕರು ಆಯ್ಕೆ ಮಾಡಿದ ಪಟ್ಟಿಯನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಪರಿಶೀಲಿಸಿ ಜಿಲ್ಲಾ ಉಸ್ತುವಾರಿ ಸಚಿವರ ಅನುಮೋದನೆ ಪಡೆದು ಸರ್ಕಾರಕ್ಕೆ ಸಲ್ಲಿಸುವುದು.

ಅದರಂತೆ, ರಾಜ್ಯದ 189 ಗ್ರಾಮೀಣ ಮತ ಕ್ಷೇತ್ರಗಳ ವ್ಯಾಪ್ತಿಯಲ್ಲಿ 939 ಗ್ರಾಮಗಳನ್ನು ಆಯ್ಕೆ ಮಾಡಿ ಇದುವರೆಗೆ ರೂ.755.02 ಕೋಟಿಗಳ ಪೂರ್ಣ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಅಭಿವೃದ್ಧಿ ಕಾಮಗಾರಿಗಳು ಪೂರ್ಣಗೊಂಡಿದ್ದು, ಯೋಜನೆಯು ಮುಕ್ತಾಯಗೊಂಡಿರುತ್ತದೆ. ವಿವರ ಅನುಬಂಧದಲ್ಲಿ ನೀಡಿದೆ.

## ಮುಖ್ಯಮಂತ್ರಿ ಗ್ರಾಮವಿಕಾಸ ಯೋಜನೆ

ಮಾನ್ಯ ಮುಖ್ಯ ಮಂತ್ರಿಗಳು 2017-18ರ ಅಯವ್ಯಯದಲ್ಲಿ ಘೋಷಣೆ ಮಾಡಿದಂತೆ ಮುಖ್ಯ ಮಂತ್ರಿ ಗ್ರಾಮ ವಿಕಾಸ ಯೋಜನೆಯನ್ನು ಪ್ರತಿ ಗ್ರಾಮಕ್ಕೆ ರೂ. 1.00 ಕೋಟಿಯಂತೆ ಒಟ್ಟು ರೂ.1000.00 ಕೋಟಿಗಳ ಅನುದಾನದಲ್ಲಿ 1000 ಗ್ರಾಮಗಳನ್ನು 2 ವರ್ಷಗಳ ಕಾಲಾವಧಿಯಲ್ಲಿ ಪೂರ್ಣಗೊಳಿಸಲು ರಾಜ್ಯಾದ್ಯಂತ ಯೋಜನೆಯನ್ನು 2017-18ನೇ ಸಾಲಿನಿಂದ ಜಾರಿಗೆ ತರಲಾಗಿದೆ.

**ಯೋಜನೆಯ ಉದ್ದೇಶ:**

- ಈ ಹಿಂದಿನ ಯೋಜನೆಗಳಾದ ಸುವರ್ಣ ಗ್ರಾಮೋದಯ ಹಾಗೂ ಗ್ರಾಮ ವಿಕಾಸ ಯೋಜನೆಯಡಿ ಆಯ್ಕೆ ಮಾಡಿದ ಗ್ರಾಮಗಳಿಗೆ ನಿಗದಿಪಡಿಸಿದ ಅನುದಾನದಿಂದ ಸಮಗ್ರ ಅಭಿವೃದ್ಧಿ ಮಾಡಲು ಕಷ್ಟಸಾದ್ಯವಾಗಿದೆ ಎಂಬ ಬೇಡಿಕೆಯನ್ನು ಮನಗಂಡು ಮುಂದುವರೆದ ಭಾಗವಾಗಿ ಪ್ರತಿ ಗ್ರಾಮಕ್ಕೆ ರೂ.1.00 ಕೋಟಿಯಂತೆ ನಿಗಧಿಪಡಿಸಲಾಗಿದೆ.

**ಗ್ರಾಮಗಳ ಆಯ್ಕೆ:**

- ಸ್ಥಳೀಯ ಗ್ರಾಮೀಣ ವಿಧಾನಸಭಾ ಸದಸ್ಯರು ಹಾಗೂ ವಿಧಾನ ಪರಿಷತ್ ಸದಸ್ಯರು ಸರ್ಕಾರದ ಆದೇಶದಲ್ಲಿ ನಿಗಧಿಪಡಿಸಿದ ಹಾಗೂ ಮಾರ್ಗಸೂಚಿಯ ಮಾನದಂಡಗಳಿಗೆ ಅನುಗುಣವಾಗಿ ಗ್ರಾಮಗಳನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶ ಕಲ್ಪಿಸಿದೆ.

ಮುಖ್ಯ ಮಂತ್ರಿ ಗ್ರಾಮ ವಿಕಾಸ ಯೋಜನೆಯಡಿ 189 ಗ್ರಾಮೀಣ ವಿಧಾನಸಭಾ ಕ್ಷೇತ್ರದ ಸದಸ್ಯರುಗಳು ಮತ್ತು ರಾಜ್ಯದ ವಿಧಾನಪರಿಷತ್ ಸದಸ್ಯರು ಗ್ರಾಮಗಳನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ. ಯೋಜನೆಯನ್ನು 2017-18 ನೇ ಸಾಲಿನಿಂದ ರಾಜ್ಯಾದ್ಯಂತ ಜಾರಿಗೊಳಿಸಿ 2 ವರ್ಷಗಳ ಕಾಲಾವಧಿಯಲ್ಲಿ ಪೂರ್ಣಗೊಳಿಸಲು ಸಮಗ್ರವಾದ ಯೋಜನೆಯ ಮಾರ್ಗಸೂಚಿ ಪುಸ್ತಕವನ್ನು ಹೊರತರಲಾಗಿದೆ.

ಅದರಂತೆ ಇದುವರೆಗೂ ವಿಧಾನ ಸಭಾ ಸದಸ್ಯರು ಹಾಗೂ ವಿಧಾನ ಪರಿಷತ್ ಸದಸ್ಯರು ಶಿಫಾರಸ್ಸು ಮಾಡಿದ ಗ್ರಾಮಗಳ ಆಯ್ಕೆ ಪಟ್ಟಿಗೆ 991 ಗ್ರಾಮಗಳಿಗೆ ಅನುಮೋದನೆ ನೀಡಲಾಗಿದೆ. 2017-18ನೇ ಸಾಲಿನಲ್ಲಿ ಯೋಜನೆಗೆ ರೂ.300.00 ಕೋಟಿಗಳನ್ನು, 2018-19ನೇ ಸಾಲಿನಲ್ಲಿ ರೂ.132.87 ಕೋಟಿಗಳನ್ನು, 2019-20ನೇ ಸಾಲಿಗೆ ರೂ.200.00 ಹಾಗೂ 2020-21ನೇ ಸಾಲಿಗೆ ರೂ.182.07 ಕೊಟಿಗಳನ್ನು ನಿಗಧಿಪಡಿಸಿದ್ದು, ನವೆಂಬರ್ 2020ರ ಅಂತ್ಯಕ್ಕೆ ಒಟ್ಟು ರೂ.735.27 ಕೋಟಿಗಳನ್ನು ಜಿಲ್ಲಾವಾರು ಬಿಡುಗಡೆ ಮಾಡಲಾಗಿದ್ದು, ನವೆಂಬರ್ 2020ರ ಅಂತ್ಯಕ್ಕೆ ರೂ.735.27 ಕೋಟಿಗಳನ್ನು ವೆಚ್ಚ ಮಾಡಲಾಗಿದೆ. ವಿವರ ಅನುಬಂಧದಲ್ಲಿ ನೀಡಿದೆ.